

# ಕಾನನ

## ನಿಸರ್ಗದೆಡೆಗೆ ಪಯಣ

## ಜನವರಿ ೨೦೧೪

BANNERUGHATTA

**WILDLIFE
CONSERVATION
GROUP**

# ಕಾನನ

ನಿಸರ್ಗದೆಡೆಗೆ ಪಯಣ

**ಸಂಪಾದಕೀಯ**

ಅಶ್ವಥ ಕೆ.ಎನ್

**ಲೇಖನ ವೃಂದ**

ಸ್ವಾಮಿ ಸೌಖ್ಯಾನಂದಜೀ ಮಹಾರಾಜ್

ಅಶ್ವಥ ಕೆ.ಎನ್

ಶಂಕರಪ್ಪ ಕೆ.ಪಿ

ಮಹದೇವ ಕೆ.ಸಿ

ಕಾರ್ತಿಕ್ ಕೋಟೆ

ನಾಗೇಶ್ ಓ. ಎಸ್

ಶ್ರೀಕಾಂತ್ ಬಿ. ಭಟ್

**ಕರಡು ತಿದ್ದುಪಡಿ**

ಮುರಳಿ ಎಸ್

**ವಿನ್ಯಾಸ**

ಮಹದೇವ ಕೆ.ಸಿ

**ಛಾಯಾಚಿತ್ರ**

ಕಾರ್ತಿಕ್ ಎ.ಕೆ

**ಇ-ವಿಳಾಸ**

kaanana.mag@gmail.com

www.issuu.com/kaanana

**ಮುಖಪುಟ**

ಸೂರ್ಯೋದಯ

WILDLIFE CONSERVATION GROUP































# ಸಂಪಾದಕೀಯ

ಸಂಕ್ರಾಂತಿಯ ಸಡಗರದಲ್ಲಿ ನಾವೆಲ್ಲಾ ಊರನ್ನ ತಳಿರು ತೋರಣಗಳಿಂದ ಸಿಂಗರಿಸಿ ಹಸು, ಕರು ಎಮ್ಮೆ ಮೊದಲಾದವುಗಳನ್ನು ಮಧುಮಗಳಂತೆ ಸಿಂಗರಿಸಿ. ಎಳ್ಳು, ಬೆಲ್ಲ, ಕಬ್ಬು ಗೆಣಸನ್ನು ತಿಂದು ತೇಗಿ ವಿಜೃಂಭಣೆಯಿಂದ ಹೊಸವರ್ಷದ ಮೊದಲ ಹಬ್ಬವನ್ನು ಆಚರಿಸುತ್ತೇವೆ. ಈ ಸಂಕ್ರಾಂತಿಯಿಂದಾಚೆ ದಿನದಿಂದ ದಿನಕ್ಕೆ ಬಿಸಿಲಿನ ಬೇಗೆ ದ್ವಿಗುಣವಾಗುತ್ತಾ ಹೋಗುತ್ತದೆ. ಇದರಿಂದ ಕಾಡಿನಲ್ಲಿರುವ ಹುಲ್ಲು, ಸಣ್ಣಸಣ್ಣ ಗಿಡಗಳು ಬಿಸಿಲಿನ ಝಳಕ್ಕೆ ಒಣಗಲಾರಂಭಿಸುತ್ತದೆ. ಮರದಲ್ಲಿನ ಎಲೆಗಳೆಲ್ಲಾ ತರಗೆಲೆಗಳಾಗಿ ಉದುಲಾರಂಭಿಸುತ್ತವೆ. ಇಲ್ಲಿಂದಾಚೆ ಕಾನನದ ವನ್ಯಮೃಗಗಳು, ಪಕ್ಷಿಗಳು ಮೊದಲಾದ ಕೀಟಗಳು, ಸರಿಸೃಪಗಳು ಒಣಗಿ ಒಪ್ಪವಾಗಿರುವ ಕಾನನದಲ್ಲಿ ಕಾಳ್ಗಿಚ್ಚಿನ ಭೀತಿಯನ್ನು ಎದುರಿಸಲು ಸಜ್ಜಾಗಬೇಕಾಗುತ್ತದೆ. ಒಣಗಿ ಕರಕಲಾದಂತಿರುವ ಕಾನನಕ್ಕೆ ಒಂದು ಕಿಡಿ ಬೆಂಕಿ ಸೋಕಿದರೆ ಸಾಕು, ಬೆಂಕಿಯ ರೌದ್ರನರ್ತನದಿಂದ ಅರಣ್ಯ ರೋದನೆ ಮುಗಿಲು ಮುಟ್ಟುತ್ತದೆ. ಯಾರೋ ಬೀಡಿ ಸಿಗರೇಟನ್ನು ಸೇದಿ ಎಸೆದ ಕಿಡಿಯಿಂದಲೋ ಅಥವಾ ಬೇಸಿಗೆಯಲ್ಲಿ ಒಳ್ಳೆ ಕಟ್ಟಿಗೆಯಾಗಲಿ ಎಂದು ಇಟ್ಟ ಬೆಂಕಿಯಿಂದಲೋ ಕಾನನವನ್ನು ನಾವು ನಮ್ಮ ದುರ್ಬುದ್ಧಿಯಿಂದ ಹಾಗು ಬೇಜವಾಬ್ದಾರಿಯಿಂದ ಹಲವಾರು ಪಕ್ಷಿ, ಸಣ್ಣಸಣ್ಣ ಕೀಟಗಳು, ಸರಿಸೃಪಗಳು ನೂರಾರು ಜಾತಿಯ ಗಿಡಗಳೂ ಸೇರಿ ಹಲವು ಪ್ರಾಣಿಗಳ ಮಾರಣಹೋಮಕ್ಕೆ ನೇರ ಹೊಣೆಯಾಗಿದ್ದೇವೆ.

ಕಳೆದ ವರ್ಷ ಬಂಡಿಪುರ ಅಭಯಾರಣ್ಯ ಕಾಳ್ಗಿಚೆಂಬ ಮಹಾಮಾರಿಗೆ ಬಲಿಯಾಗಿ ಸಾವಿರಾರು ಎಕರೆ ಅರಣ್ಯ ಪ್ರದೇಶ ಕರಕಲಾಗಿತ್ತು. ಹೀಗೆ ಯಾರೋ ಹಚ್ಚಿದ ಬೆಂಕಿಯಿಂದ ಆವರಿಸಿದ ಬೆಂಕಿಯನ್ನು ಆರಿಸಲು ಹಲವಾರು ವೈಜ್ಞಾನಿಕ ವಿಧಾನಗಳು ಆವಿಷ್ಕಾರಗೊಂಡಿದ್ದರೂ ನಮ್ಮ ದೇಶದಲ್ಲಿ ಈಗಲೂ ಬರಿ ಹಸಿಸೊಪ್ಪನ್ನು ಹಿಡಿದು ಬೆಂಕಿಯ ರೌದ್ರ ನರ್ತನದ ಎದುರು ಬೆಂಕಿಗೆ ಸಿಕ್ಕ ಕೀಟಗಳಂತೆ ನಮ್ಮ ಅರಣ್ಯ ಸಿಬ್ಬಂದಿ ಬೆಂಕಿಯನ್ನು ನಂದಿಸುವಲ್ಲಿ ಎಷ್ಟು ಮಟ್ಟಿಗೆ ಸಾಧ್ಯ ನೀವೇ ಯೋಚಿಸಿ!.

ರಾಜಕಾರಣಿಗಳಿಗೋ ಅಥವಾ ಗಣ್ಯ ವ್ಯಕ್ತಿಗಳಿಗೋ Z+ ಸುರಕ್ಷತೆಯನ್ನು ಕೊಡುವ ನಮ್ಮದೇಶ, ನಮ್ಮ ದೇಶದ ನೈಸರ್ಗಿಕ ಸಂಪತ್ತು, ನಮ್ಮೆಲ್ಲರ ಉಸಿರಾಗಿರುವ ಕಾಡುಗಳಿಗೇಕೆ ಮಲತಾಯಿ ಧೋರಣೆಯನ್ನು ಮಾಡುತ್ತಿದ್ದಾರೆ, ಎಂಬುದು ಒಂದು ಯಕ್ಷ ಪ್ರಶ್ನೆಯಾಗಿದೆ. ವಿದೇಶದಲ್ಲಿ ಬೆಂಕಿ ಬಿದ್ದ ಮರುಕ್ಷಣವೆ ಜಾಗರೂಕರಾಗಿ ಬೆಂಕಿನಂದಿಸುವಲ್ಲಿ ಯಶಸ್ವಿಯಾದ ಉದಾಹರಣೆಗಳು ಬೇಕಾದಷ್ಟಿವೆ, ಇದಕ್ಕೆಲ್ಲಾ ಆ ದೇಶದಲ್ಲಿನ ಪ್ರಾಮಾಣಿಕತೆ ಹಾಗೂ ಸಿಬ್ಬಂದಿಯಲ್ಲಿನ ಕರ್ತವ್ಯ ಪ್ರೇಮವೇ ಕಾರಣ. ಯಾವಾಗ ನಮ್ಮಲ್ಲಿ ನಮ್ಮ ದೇಶದ ಸಂಪತ್ತು ನಮ್ಮ ಸಂಪತ್ತು ಎಂದು ನಾವೆಲ್ಲಾ ಭಾವಿಸಿದಾಗ ಇದೆಲ್ಲಾ ನಮ್ಮ ದೇಶದಲ್ಲೂ ಸಾಧ್ಯ. ಕನಿಷ್ಟ ಪಕ್ಷ ಅರಣ್ಯ ರಕ್ಷಣೆಯ ಬಗ್ಗೆ ಯೋಚಿಸದಿದ್ದರು, ಬೇಸಿಗೆಯಲ್ಲಿ ಕಾನನಕ್ಕೆ ಬೆಂಕಿಯಿಡುವ ಹೇಯ ಕೃತ್ಯಕ್ಕೆ ಮಾತ್ರ ಕೈ ಹಾಕದಿರಿ!.

ಅರಣ್ಯ, ವನ್ಯಜೀವಿ, ಪರಿಸರ ಸಂರಕ್ಷಣೆ, ವಿಜ್ಞಾನ, ವನ್ಯಜೀವಿ ಛಾಯಾಚಿತ್ರ, ಕವನ, ಕಥೆಗಳು ಹಾಗೂ ಲೇಖನಗಳನ್ನು ತಾವೂ ಕಾನನಕ್ಕೆ ಬರೆಯಬಹುದು.

ಇ-ಅಂಚೆ : kaanana.mag@gmail.com

**Wildlife Conservation Group**



# ಆಧ್ಯಾತ್ಮದಲ್ಲಿ ವನ್ಯಜೀವಿಗಳು

## ಶ್ರೀ ರಾಮಕೃಷ್ಣರ ಉಪದೇಶಗಳಲ್ಲಿ ಪ್ರಾಣಿಪಕ್ಷಿಗಳು

### *ಕುರಿಯೆಂದು ಭಾವಿಸಿದ್ದ ಹುಲಿ

ಒಂದು ಊರು, ಅಲ್ಲೊಬ್ಬ ಕುರುಬ ಪ್ರತಿದಿನ ಕುರಿಗಳನ್ನು ಮೇಯಿಸಲು ಕಾಡಿಗೆ ಕುರಿಗಳನ್ನು ಹೊಡೆದುಕೊಂಡು ಹೋಗುತ್ತಿದ್ದ. ಅದೊಂದು ದಿನ ಎಲ್ಲ ಕುರಿಗಳು ಮೇಯುವುದರಲ್ಲಿ ಮಗ್ನವಾಗಿದ್ದಾಗ ಎಲ್ಲಿಂದಲೋ ಬಂದ ಒಂದು ಗರ್ಭಿಣಿ ಹುಲಿ ಕುರಿಗಳನ್ನು ನೋಡಿ ಸಮಯ ಸಾಧಿಸಿ ಒಂದು ಕುರಿಯ ಮೇಲೆ ಹಾರಿತು. ಹಾರಿದ ರಬಸಕ್ಕೆ ಆಯತಪ್ಪಿ ಕೆಳಗೆ ಬಿದ್ದ ಹುಲಿ, ಬಲವಾಗಿ ಗಾಯಗೊಂಡು ಹುಲಿ ಒಂದು ಹುಲಿಮರಿಗೆ ಜನ್ಮ ನೀಡಿ ಮರಣ ಹೊಂದಿತು.

ಆ ಕುರುಬ, ಆ ಸುಂದರ ಹುಲಿಮರಿಯನ್ನು ತನ್ನೊಂದಿಗೆ ಮನೆಗೆ ತಂದು ತನ್ನ ಕುರಿಗಳ ಜೊತೆಗೆ ಆರೈಕೆ ಮಾಡತೊಡಗಿದ ಹುಲಿ ಮರಿ ಕುರಿಮರಿಗಳಂತೆ ಕುರಿಗಳಲ್ಲಿ ಹಾಲನ್ನು ಕುಡಿಯುತ್ತಾ, ಕುರಿಗಳಂತೆ ಹುಲ್ಲನ್ನು ತಿನ್ನುತ್ತಾ ಕುರಿಗಳ ಜೊತೆಯಲ್ಲಿ ಕುರಿಯಾಗಿಯೇ ಬೆಳೆದು ತಾನು ಹುಲಿ ಎಂಬುದನ್ನೇ ಮರೆತು ಬಿಟ್ಟಿತು. ಹೀಗೆ ದಿನಗಳು ಉರುಳಿದವು ಹುಲಿ ಮರಿ ಸ್ವಲ್ಪ ದೊಡ್ಡದಾಯಿತು.

ಒಂದು ದಿನ ಕುರಿಗಳು ಕಾಡಿನಲ್ಲಿ ಮೇಯುತ್ತಿದ್ದಾಗ ಮತ್ತೊಂದು ಹುಲಿ ಈ ಕುರಿಗಳನ್ನ ಹಿಡಿಯಲು ಬಂತು. ಕುರಿಗಳ ಮಧ್ಯೆ ಆ ಕುರಿಹುಲಿಯನ್ನು ಕಂಡು ಆಶ್ಚರ್ಯಗೊಂಡಿತು, ಆ ಹುಲಿಗೆ ತಾನು ಹುಲಿ ಎಂದು ತಿಳಿಸಲು ಕಾಡಿನ ಹುಲಿ ಊರ ಹುಲಿಯ ಬಳಿ ಹೋಗಿ ಅದನ್ನು ಹಿಡಿದು ಹೇಳಿತು



"ಏನಾಶ್ಚರ್ಯ ನೀನು ಕುರಿಗಳ ಹಾಗೆ ಹುಲ್ಲನ್ನು ತಿನ್ನುತಿರುವೆಯಾ?

ಕುರಿಗಳ ಹಾಗೆ ಬ್ಯಾ..ಬ್ಯಾ.. ಎನ್ನುತ್ತೀಯ!, ನೀನು ಹುಲಿ, ಈ ಕಾಡಿನರಾಜ, ಮಾಂಸ ತಿನ್ನಬೇಕು,

ಗರ್ಜಿಸಬೇಕು, ಎಂದಿತು. ಅದಕ್ಕೆ ಊರಿನ ಹುಲಿ ನೀನು ಏನೇನೋ ಹೇಳಬೇಡ ನಾನು ಹುಲಿಯಲ್ಲ ಕುರಿ ಎಂದಿತು. ಆಗ ಕಾಡಿನ ಹುಲಿ ಊರಿನ ಹುಲಿಯನ್ನು ಕೊಳದ ಬಳಿ ಕರೆದುಕೊಂಡು ಹೋಗಿ ನೋಡು ನಿನ್ನ ಮತ್ತು ನನ್ನ ಮುಖಗಳು ನೋಡಲು ಒಂದೇ ರೀತಿಯಿದೆ ಎಂದು ನೀರಿನಲ್ಲಿ ಪ್ರತಿಬಿಂಭವನ್ನು ತೋರಿಸಿತು.

ಆಗ ಊರ ಹುಲಿಗೆ ಸ್ವಲ್ಪ ತನ್ನ ತನದ ಅರಿವಾಯಿತು. ಆಗ ಕಾಡಿನ ಹುಲಿ ಜೋರಾಗಿ ಗರ್ಜಿಸಿ ಊರಹುಲಿಯನ್ನು ಗರ್ಜಿಸಲು ಹೇಳಿತು. ಆಗ ಗರ್ಜಿಸಿದ ಊರಹುಲಿಗೆ ನಿಜವಾಗಲೂ ತನ್ತನದ ಅರಿವಾಗಿ ಆನಂದದಿಂದ ಜೋರಾಗಿ ಗರ್ಜಿಸಲಾರಂಭಿಸಿತು. ನಂತರ ಒಂದು ಕುರಿಯನ್ನು ಕೊಂಡು ಊರಹುಲಿಯ ಬಾಯಿಗೆ ಹಾಕಿ ಇದು ನಿನ್ನ ಆಹಾರ, ಹುಲ್ಲಲ್ಲ ಎಂದಾಗ ತನ್ನ ನಿಜಸ್ವರೂಪದ ಅರಿವಾಗಿ ಆನಂದದಿಂದ ಊರಹುಲಿ ಕಾಡಿನತ್ತ ಹೆಜ್ಜೆಹಾಕಿತು.



ಇದನ್ನು ಹೇಳುತ್ತಾ ಶ್ರೀರಾಮಕೃಷ್ಣರು ಹೇಳುತ್ತಾರೆ, ನಾವೆಲ್ಲಾ ಪ್ರಸ್ತುತ ದೈವೀಗುಣಗಳಿಂದ ತುಂಬಿದ್ದೇವೆ. ಅದು ನಮ್ಮ ಸ್ವರೂಪವಾಗಿದ್ದರೂ ಸಹ ನಾವು ಸಂಸಾರದ ಅನೇಕ ಜನ್ಮಗಳು ಕಳೆದುದರಿಂದ ನಾವು ಈ ದೇಹ ಮನಸ್ಸುಗಳೊಂದಿಗೆ ಪೌದಾತ್ಮವನ್ನು ಬೆಳೆಸಿಕೊಂಡು ನಾವೇ ಈ ಶರೀರ ಎಂದು ಭ್ರಮಿಸುತ್ತಿದ್ದೇವೆ. ನಿಜವಾದ ಗುರು ಬಂದು ನಮ್ಮ ನಮ್ಮ ನಿಜಸ್ವರೂಪವನ್ನು ತಿಳಿಸಿದಾಗ ನಮ್ಮ ದೈವತೆಯ ಅರಿವು ನಮ್ಮದಾಗುತ್ತದೆ. ಆ ದಿವ್ಯತೆಯನ್ನು ತಿಳಿಸಿಕೊಡುವವನೇ ಗುರು.



- ಸ್ವಾಮಿ ಸೌಖ್ಯಾನಂದಜೀ ಮಹಾರಾಜ್



# ಹಕ್ಕಿಲೋಕ

## * ಗುಟ್ಟಿ ಮತ್ತು ದೆವ್ವ

ಅದು 2004 ರ ಬೇಸಿಗೆಯ ಕಾಲ, ಸರ್ಕಾರದಿಂದ ಆನೆಗಳ ಗಣತಿಯ ಹುಕುಂ ಬಂದಿದ್ದರಿಂದ ರಾಜ್ಯದೆಲ್ಲೆಡೆ ಆನೆಗಳ ಲೆಕ್ಕಚಾರ ನಡೆಯುತ್ತಿತ್ತು. ಅದರಲ್ಲಿ ನಾನು ಕೂಡ ಭಾಗವಹಿಸಿದ್ದೆ. ಬನ್ನೇರುಘಟ್ಟದಲ್ಲಿ ಮೂರು ದಿನಗಳ ಈ ಕಾರ್ಯಗಾರ ನಡೆಯಿತು. ಮೊದಲನೇ ದಿನದಂದು ಕಾಡಿನ ನಡುವೆ ಸೀಳುದಾರಿಗಳಲ್ಲಿ ನಡೆದು ಕಣ್ಣಿಗೆ ಕಾಣುವ ಮೃಗಜಂತುಗಳನ್ನು ಗಮನಿಸಿ ದಾಖಲಿಸುವುದು. ಎರಡನೆಯ ದಿನ ಕೆರೆಗಳ ಬಳಿ ರಾತ್ರಿ-ಹಗಲು ಕಾದು ಕುಳಿತು ನೀರಿಗಾಗಿ ಬರುವ ಪ್ರಾಣಿಗಳನ್ನು ಲೆಕ್ಕದ ಪುಸ್ತಕದಲ್ಲಿ ಬರೆಯುವ ಕೆಲಸ, ಮೂರನೇ ದಿನದಂದು ಕಾಡಿನ ನಡುವೆ ಹಾದುಹೋಗಿರುವ ಜೀಪುದಾರಿಗಳಲ್ಲಿ ಹರಡಿರುವ ಆನೆಯ ಲದ್ದಿಗಳನ್ನು ಅಳೆಯುವುದು.

ಮೊದಲನೆಯ ದಿನ ಗಣತಿ ಉತ್ಸುಕತೆಯಿಂದಲೇ ಶುರುವಾಯಿತು, ವಾಚರ್ಸ್, ಗಾರ್ಡ್ಗಳ ಜೊತೆ ವಾಲನ್ಟಿಯರ್ ಗಳನ್ನು ಗುಂಪುಗಳಾಗಿ ಮಾಡಿ ಕಾಡಿನ ನಡುವೆ ಸೀಳುದಾರಿಗಳಲ್ಲಿ ನಡೆದು ಪ್ರಾಣಿಗಳ ಲೆಕ್ಕವನ್ನು ಬರೆಯುವ ಕೆಲಸ. ಮೊದಲನೇ ದಿನ ಮಾಡಿದ ಗುಂಪು ಕೊನೆಯ ದಿನದವರಿಗೂ ಅದೇ ಗುಂಪು ಕಾಯಂ. ನಮ್ಮ ಗುಂಪಿನಲ್ಲಿ ಗುಟ್ಟಿ, ನಾರಾಯಣರ ಜೊತೆ ನಾನು, ಮೊದಲನೇ ದಿನ ಸೀಳುದಾರಿಯಲ್ಲಿ ನಡೆದು ಸಾಗಬೇಕಾದರೆ ಒಂದೆರಡು ಜಿಂಕೆಗಳು ಸೀಳುದಾರಿಯನ್ನು ಸೀಳಿ ಜಿಗಿದು ಹೋದವು. ಅಲ್ಲಲ್ಲಿ ಮೂರ್ನಾಲ್ಕು ಮೊಲಗಳು ಪೊದೆಗಳಿಂದ ಹಾರಿ ಪರಾರಿಯಾದವು. ಯಾವುದೋ ಎರಡು-ಮೂರು ತಿಂಗಳ ಹಿಂದೆ ಹಾಕಿಹೋಗಿರುವ ಆನೆಯ ಲದ್ದಿ ಬಿಟ್ಟರೇ ಆನೆಗಳು ಸಿಗಲೇ ಇಲ್ಲ. ಕಾಡಿನಲ್ಲಿ ಹಕ್ಕಿಗಳೇನೋ ದಂಡಿಯಾಗಿದ್ದವೂ ಆದರೆ ಹಕ್ಕಿಗಳ ಗಣತಿ ತೆಗೆದುಕೊಳ್ಳುವುದು ಇರಲ್ಲಿಲ್ಲ ಬಿಡಿ!. ಗುಟ್ಟಿ, ನಾರಾಯಣರ ಜೊತೆ ಸಂಜೆವರಿಗೂ ಕಾಡಿನಲ್ಲಿ ಸುತ್ತಿಬಂದಿದ್ದು ಕಾಲುಗಳು ನೋವು ಬಂದರೂ ಕೂಡ ಏನೋ ಒಂದು ಕಾಡುಸುತ್ತಿದ ಅನುಭವ ಮನಸ್ಸಿಗೆ ಉಲ್ಲಾಸವನ್ನು ತಂದುಕೊಟ್ಟಿತ್ತು. ರಾತ್ರಿ ಮನೆಗೆ ಬಂದು ಸ್ನಾನ, ಊಟ ಮುಗಿಸಿ ಮಲಗಿದಾಗ ಬೆಳಗ್ಗೆಯಿಂದ ಗುಟ್ಟಿ, ನಾರಾಯಣರ ಜೊತೆ ಕಾಡು ಸುತ್ತಿದ್ದು ಕನಸ್ಸಲ್ಲದಿದ್ದರೂ, ಕಣ್ಮುಂದೆ ಚಿತ್ರಗಳು ಮೂಡುತ್ತಿದ್ದವು. ನಾಳೆಯ ಅನುಭವವನ್ನು ಯೋಚಿಸುತ್ತಾ ನಿದ್ದೆಯೇ ಬರದೆ ಯಾವುದೋಗೊತ್ತಿಲ್ಲದ ಕಾಡಿನಲ್ಲಿ ಆನೆಗಳ ನಡುವೆ, ಜಿಂಕೆಗಳ ನಡುವೆ, ದಟ್ಟ ಅರಣ್ಯದ ನಡುವೆ ಲೀನವಾಗಿ ಹೋದೆ.



ರಾತ್ರಿ ಎರಡು ಗಂಟೆಯಾಗಿರಬೇಕು, ಜೀಪು ಮನೆಯ ಮುಂದೆ ಹಾರನ್ ಹೊಡೆಯಿತು. ಮುಖವನ್ನು ಸಾರಿಸಿಕೊಂಡು ಹೊರಬಂದೆ. ಕಗ್ಗತ್ತಲ ನಡುವೆ ಜೀಪು ದಾರಿಯಲ್ಲಿ ಕಾಣದೆಯೇ ನಿಂತ್ತಿತ್ತು. ಜೀಪು ಕಾಣದಿದ್ದರು, ಗುಟ್ಟಿಯ ಕೇಕೇ ಜೀಪು ಇರುವಿಕೆಯನ್ನು ಸಾರಿ ಹೇಳುತ್ತಿತ್ತು. ಜೀಪು ನಮ್ಮನ್ನು ಕೂರಿಸಿಕೊಂಡು ಚಿಕ್ಕರಾಗಳ್ಳಿ ಹಜಾಮನಕಲ್ಲು ಜಾಗಕ್ಕೆ ಬಿಡಬೇಕಿತ್ತು. ಜೀಪಿನಲ್ಲಿ ಕುಳಿತೆ ನಿಧಾನವಾಗಿ ಸರಿದು ಕಾಡು ದಾರಿ ಸೇರಿತು. ಕಾಡನ್ನು ಮುಸುಕಿದ ಕತ್ತಲನ್ನು ಜೀಪಿನ ಬೆಳಕು ಸೀಳುತ್ತಾ ಮುಂದೆ ಸಾಗುತ್ತಿತ್ತು. ವೆಂಕ್ಟಪ್ಪ ಗಾರ್ಡು ಸಾಹೇಬ ಕೊಟ್ಟಿದ್ದ ಬೆಳಗಿನ ತಿಂಡಿಗಳನ್ನು ಗುಟ್ಟಿಗೆ ಕೊಡುತ್ತಿದ್ದ, "ಅದು ಬ್ರೆಡ್, ಒಬ್ಬೊಬ್ಬರಿಗೆ ಒಂದೊಂದು ಪೌಂಡ್, ಬಿಸ್ಕತ್ ಇದೆ, ನೀರು ಬಾಟ್ಲು ತಗೋ" ಎಂದ. ಗುಟ್ಟಿಯೂ ಎಲ್ಲವನ್ನೂ ತನ್ನ ಬ್ಯಾಗಿನಲ್ಲಿ ತುರುಕಿಕೊಂಡ, ಜೀಪು ಹಜಾಮನಕಲ್ಲು ಬಳಿ ನಮ್ಮನ್ನು ಇಳಿಸಿ ಹೊರಟು ಹೋಯ್ತು. ಜೀಪಿನ ಹಿಂದೆ ಹೊರಡುತ್ತಿದ್ದ ಕೆಂಪು ದೀಪವನ್ನು ಒಮ್ಮೆ ದಿಟ್ಟಿಸಿನೋಡಿದ ಗುಟ್ಟಿ. "ನಡುರಾತ್ರಿಲ್ಲಿ ಈ ನಡು ಕಾಡಲ್ಲಿ ಬಿಟ್ಟು ಹೊರಟೋದ್ರು, ಹಾಳ್ಮೂಂಡೆ ಮಕ್ಳು!" ಎಂದು ಒಮ್ಮೆ ಶಪಿಸಿದ. ಹಜಾಮನಕಲ್ಲಿಂದ ಸುಮಾರು ಮೂರು ಕಿಲೋ ಮೀಟರ್ ದೂರದಲ್ಲಿರುವ ಕೆಬ್ಬಳ್ಳದ ಕೆರೆಗೆ ನಡೆದೇ ಹೋಗಬೇಕಿತ್ತು.




ಇಡೀ ಬನ್ನೇರುಘಟ್ಟ ಕಾಡಿಗೆಲ್ಲ ಈ ಪ್ರದೇಶ ದಟ್ಟವಾದ ಕಾಡೇ!, ಕಾಡಿನ ನಡುವೆ ಕಾಲುದಾರಿಯಲ್ಲಿ ನಡೆದುಹೋಗುತ್ತಿದ್ದೆವು. ಮುಂದೆ ನಾರಾಯಣ, ನಾರಾಯಣನ ಹಿಂದೆ ನಾನು, ನನ್ನ ಹಿಂದೆ ಗುಟ್ಟಿಯು ಬ್ಯಾಗ್ ನು ನೇತುಹಾಕಿಕೊಂಡು ಬರಬರನೇ ಜೋರಾಗಿ ಬರುತ್ತಿದ್ದ. ಮುಂದೆ ನಾರಾಯಣನ ಕೈಯಲ್ಲಿದ್ದ ಟಾರ್ಚ್ ಆ ಕಪ್ಪು ಕಗ್ಗತ್ತಲನ್ನು ಕಷ್ಟಪಟ್ಟು ಕಿತ್ತಾಡಿ ಓಡಿಸಲಾಗದೆ ಕಾಲುದಾರಿಯ ಸ್ವಲ್ಪ ಜಾಗವನ್ನು ಆವರಿಸಿಕೊಂಡಿತ್ತು. ಆ ಟಾರ್ಚ್ ಬೆಳಕು ನಾರಾಯಣನ ಸ್ವಲ್ಪ ಆ ಕಡೆ ಈ ಕಡೆ ಅಲುಗಾಡಿದಾಗ ಮಾತ್ರ ಕಾಣುತ್ತಿತ್ತು. ಗುಟ್ಟಿಗೆ ಏನೂ ಕಾಣುತ್ತಿರಲ್ಲಿಲ್ಲ, ಯಾವುದೋ ಅಂದಾಜಿನ ಮೇಲೆ ನಡೆದು ಬರುತ್ತಿದ್ದ. ಒಮ್ಮೊಮ್ಮೆ ನನ್ನನ್ನು ಹಿಂದ್ದಿಕ್ಕಲು ಪ್ರಯತ್ನಿಸಿ ವಿಪಲವಾಗಿ ಮತ್ತೆ ಹಿಂದೆ ಸರಿಯುತ್ತಿದ್ದದ್ದು, ನನಗೆ ಗುಟ್ಟಿಯ ಧೈರ್ಯದ ಬಗ್ಗೆ ಅನುಮಾನ ಬರಿಸುತ್ತಿತ್ತು. ಒಮ್ಮೆ ಏನೋ ಸದ್ದಾಗಿ ನಾರಾಯಣ ನಿಂತುಕೊಂಡು ಆನೆಯೋ ಹಂದಿಯೋ ಅಥವಾ ಜಿಂಕೆಯೋ ಎಂದು ಶಬ್ಧವನ್ನು ಆಲಿಸುತ್ತಿದ್ದ, ನಿಂತಾಗ ರಾತ್ರಿಯಿಂದ ಕಟ್ಟಿಕೊಂಡಿದ ಮಂಜು ಮರಗಳ ರೆಂಬೆ-ಕೊಂಬೆಗಳಲ್ಲಿ ಶೇಖರಣೆಯಾಗಿ ಇಬ್ಬನಿಗಳು ತರಗೆಲೆಗಳ ಮೇಲೆ ಪಟಪಟ ಎಂದು ತೊಟ್ಟಿಕ್ಕುವ ಸದ್ದು ಸ್ವಷ್ಟವಾಗಿ ಕೇಳಿಸುತ್ತಿತ್ತು. ನಮ್ಮ ಪಕ್ಕದಲ್ಲಿರುವ ಒಂದು ದೊಡ್ಡಲಂಟನದ ಪೊದೆಯೊಳಗೆ ಏನೋ "ಲಟಕ್" ಎಂಬ ಸದ್ದು ಬಂದು!, ನಾರಾಯಣನು ತಟಕನೇ ನಿಂತು ಬಿಟ್ಟ. ಮುಂದೆ ಹೆಜ್ಜೆಯನ್ನು ಇಡದಂತೆ ಕೈಯಿಂದ ಸಂಜ್ಞೆಮಾಡಿ ಹೇಳಿದ, ನಾನು ನನ್ನ ಹಿಂದೆ ಇದ್ದ ಗುಟ್ಟಿಗೆ ಈ ಸಂಜ್ಞೆಯನ್ನು ವರ್ಗಾಯಿಸಬೇಕಿತ್ತು. ನನಗೆ ತಿಳಿದಿಲ್ಲವಾದ್ದರಿಂದ ಸುಮ್ಮನೆ ನಿಂತೆ. ಹಿಂದೆ ಇದ್ದ ಗುಟ್ಟಿಯೂ ಏನು? ಎಂದು ಕಿಸಕಿಸ ಮಾತನಾಡಿ ಹಿಂದೆಯಿದ್ದ ತರಗೆಲಗಳ ಮೇಲೆ ಕಾಲಿಟ್ಟದ್ದೆ ತಡ!, ಪೊದೆಯೊಳಗಿಂದ ಇದ್ದಕ್ಕಿದಂತೆ ಬರಬರ ಸದ್ದು ಜೋರಾಗಿ, ನನ್ನ ಕಿವಿ ಬಿಸಿಯಾಗಿ, ತಲೆಯ ಕೂದಲುಗಳೆಲ್ಲ ನಿಮಿರಿ, ಎದೆ ಒಮ್ಮೆ ಬಡಿದುಕೊಂಡಿತು.ಯಾವುದೋ ಪ್ರಾಣಿ ನಮ್ಮ ಮೇಲೆ ಎರಗುವುದು ಖಚಿತ ಎಂಬ ಭಾವನೆ ಮೂಡಿತು. ಹಿಂದೆ ತಿರುಗಿ ನೋಡಿದೆ ಗುಟ್ಟಿಯೂ ಬರಬರ ಸದ್ದಿನ ಜೊತೆಯಲ್ಲಿಯೇ ಮಾಯವಾಗಿದ್ದ, ಹಿಂದೆ ನೋಡಿ ಮುಂದೆ

ನೋಡುವುದರಲ್ಲಿ ನಾರಾಯಣ ಮಾಯಾವಾಗಿದ್ದ, ನನಗೆ ಏನೂ ಮಾಡುವುದು ತೋಚದೆ ಬಂದ ದಾರಿಯಲ್ಲೇ ಹಿಂದಕ್ಕೆ ಓಡಲಾರಂಭಿಸಿದೆ!, ಹಿಂದೆಯಿಂದ ಯಾವುದೋ ಒಂದು ಸದ್ದು “ಮರ ಏರಿ ಕುಳಿತಿಕೋ” ಎಂಬ ಕೂಗು ಕೇಳಿಸಿತು. ಅತ್ತ-ಇತ್ತ ನೋಡಿದೆ ಕತ್ತಲಲ್ಲಿ ಯಾವುದೇ ಮರ ಕಾಣಲ್ಲಿಲ್ಲ. ಆ “ಬರಬರ” ಸದ್ದು ತನ್ನತ್ತಲೇ ಧಾವಿಸುತ್ತಿತ್ತು!, ನನ್ನ ಪಕ್ಕದಲ್ಲಿಯೇ ಏಳೆಂಟು ಕಾಡುಹಂದಿಗಳು ಪೊದೆಯೊಳಗಿಂದ ನುಗ್ಗಿ ಹೋದವು. ತಲೆ ಎತ್ತಿನೋಡಿದೆ ಮುಂದಿನ ಒಂದು ಮರದ ಮೇಲಿನ ತುದಿಯಲ್ಲಿ ನಾರಾಯಣ ಕುಳಿತ್ತಿದ್ದ!, ಜರಜರನೇ ಇಳಿದು ಗುಟ್ಟಿಯನ್ನು ಕೂಗಿಕೊಂಡ. ಹಿಂದಿನ ಮರದಿಂದ “ಹೋಯ್” ಎಂಬ ಶಬ್ಧ ಬಂದಿತು. “ನಿಮ್ಮನ್ನು ನಂಬಿಕೊಂಡರೆ ನನ್ನ ಪ್ರಾಣ ತೆಗೆತೀರಿ ನೀವೂ! ಅಷ್ಟೆ” ಎಂದು ಮನಸ್ಸಿನಲ್ಲೇ ಅಂದುಕೊಂಡು ನಾರಾಯಣನನ್ನು ಹಿಂಬಾಲಿಸಿದೆ. ಅದೇನನ್ನೋ ಪೇಚಾಡುತ್ತಾ. . ಗುಟ್ಟಿಯೂ ಹಿಂದೆ ಬರುತ್ತಿದ್ದ.

ಬೆಳಗಿನ ಜಾವ ನಾಲ್ಕಕ್ಕೆ ಜಾಗಕ್ಕೆ ಹೋಗಿ, ಒಂದು ದೈತ್ಯ ಮರವನ್ನು ಏರಿ ಅಲ್ಲಲ್ಲಿ ಕೊಂಬೆಗಳ ಮೇಲೆ ಕುಳಿತು ಕೊಂಡೆವು. ಮರ ದಪ್ಪವಾದರೂ ಅಗಲವಿಲ್ಲದೆ ನೇರವಾಗಿ ಆಕಾಶಕ್ಕೆ ಬೆಳೆದು ನಿಂತಿತ್ತು. ಮೊದಲು ಗುಟ್ಟಿಯೂ ಮರವನ್ನೇರಿದ. ಮುಕ್ಕಾಲು ಮರವನ್ನು ಏರಿ ಕೊಂಬೆಯ ಮೇಲೆ ಅಂಡೆಯನಾಕಿ ಒರಗಿಕೊಳ್ಳಲು ಎತ್ತರಕ್ಕೆ ಬೆಳೆದಿದ್ದ ದಪ್ಪನೆಯ ಮರಕ್ಕೆ ಒರಗಿಕುಳಿತುಕೊಂಡ. ನಾನು ಕಷ್ಟಪಟ್ಟು ಮರವನ್ನು ತಬ್ಬಿಕೊಂಡು ಏರಿ ಗುಟ್ಟಿಯ ಕಾಲಬಳಿಯ ಕೆಳಗೆ ಕೊಂಬೆಯ ಮೇಲೆ ಕುಳಿತುಕೊಂಡೆ. ನಾರಾಯಣನು ನನ್ನ ಕೆಳಗಡೆ ಕೊಂಬೆಯ ಮೇಲೆ ಕುಳಿತುಕೊಂಡ. ಯಾವುದಾದರು ಪ್ರಾಣಿಗಳು ಕೆಳಗಡೆಯ ಕೆರೆಗೆ ನೀರಿಗಾಗಿ ಬರುತ್ತವೆ ಎಂದು ಕಾದುಕುಳಿತು ಕೊಂಡೆವು. ಅರ್ಧ ಮುಕ್ಕಾಲು ಗಂಟೆಯಾಯಿತು. ಸುತ್ತಲ ಕಾಡು ಬೆಟ್ಟಗಳು ಕರ್ರಗೆ ಕಗ್ಗತ್ತಲಾಗಿತ್ತು. ಆಕಾಶದಲ್ಲಿ ಮೋಡಗಳಿಲ್ಲದೆ ಚುಕ್ಕೆಗಳು ಕಾಣಿಸುತ್ತಿದ್ದು. ಕೆಳಗೆ ತರಗೆಲೆಗಳಲ್ಲಿ ಯಾವುದೋ ಹೆಣ್ಣು ಮೋಹಿನಿಯು ಗೆಜ್ಜೆಗಳನ್ನು ಹಾಕಿಕೊಂಡು ಗಲಕ್. . .ಗಲಕ್. . .ಗಲಕ್. . .ಎಂಬ ಗೆಜ್ಜೆಯಂತಹ ಸದ್ದು ರಾತ್ರಿಯ ಹುಳುಗಳು ಮಾಡುತ್ತಿದ್ದವು. ರಾತ್ರಿ ಹುಳುಗಳು ಬಿಟ್ಟರೆ ಬೇರೆಯಾವ ಸದ್ದು ಇಲ್ಲ. ಮೌನ. . .ಒಂದೇ ಕೊಂಬೆಯ ಮೇಲೆಯೇ ಕುಳಿತು ಕುಳಿತು ಕುಂಡಿಯೂ ನೋವಾಗಿ ಕುಳಿತುಕೊಳ್ಳಲಾಗದೆ ರೆಂಬೆಗೂ ಕುಂಡಿಗು ಘರ್ಷಣೆ ಹೆಚ್ಚಾಗಿ ಅಲುಗಾಡಲು ಶುರುಮಾಡಿದ ಗುಟ್ಟಿ. ತಲೆಯ ಮೇಲೆ ಒಂದೆರಡು ಸಾರಿ ಲಟಕ್ ಎಂಬ ಸದ್ದಾಯಿತು. ಮೇಲಕ್ಕೆ ತಲೆ ಎತ್ತಿನೋಡಿದೆ ಅಲ್ಪಸ್ವಲ್ಪವಿದ್ದ ಎಲೆಗಳ ನಡುವೆ ಗುಟ್ಟಿಯೂ ಕುಳಿತ್ತಿದ್ದ, ಅವನೆ ಲಟಕ್ ಎಂಬ ಸದ್ದು ಮಾಡುತ್ತಿರಬೇಕು ಎಂದು ಸುಮ್ಮನಾದೆ ಒಮ್ಮೆ



ಗುಟ್ಟಿಯೂ ಏನನ್ನೋ ಅವನ ತಲೆಯ ಮೇಲೆ ದಿಟ್ಟಿಸಿ ನೋಡುತ್ತಿದ್ದ. ಎಲೆಗಳಲ್ಲಿ ಶೇಖರಣೆಯಾಗಿರುವ ಇಬ್ಬನಿಯೂ ಗುಟ್ಟಿಯ ಮುಖದ ಮೇಲೆ ಬಿದ್ದು ಮುಖವನ್ನು ಒರಸಿಕೊಳ್ಳುವ ಸದ್ದುಕೇಳುತ್ತಿತ್ತು.

ಸ್ವಲ್ಪ ಸಮಯದ ನಂತರ ಗುಟ್ಟಿಯೂ ತನ್ನ ಕಿರುಧ್ವನಿಯಿಂದ “ಅಸ್ವಥಪ್ಪ. . .ಅಸ್ವಥಪ್ಪ. . .”ಎಂದು ಕರೆಯುತ್ತಿದ್ದ, ನನಗೆ ಸರಿಯಾಗಿ ಕೇಳದೆ ಕಿಸಕಿಸ ಎಂಬ ಶಬ್ಧಮಾತ್ರ ಕೇಳಿಸಿತು, ಸುಮ್ಮನಾದೆ. ಮತ್ತೆ ಸ್ವಲ್ಪ ಸಮಯದ ನಂತರ ಅದೇ ಕಿಸಕಿಸ ಸದ್ದು!, ಅಸ್ವಥಪ್ಪ. . .ಅಸ್ವಥಪ್ಪ. . .ಎಂದ ಗುಟ್ಟಿ!. ತಲೆಯನ್ನು ಮೇಲಕ್ಕೆತ್ತಿ ನೋಡಿದೆ ಗುಟ್ಟಿಯೂ ಗಡಗಡ ನಡುಗುತ್ತಿದ್ದಾನೆ, ಎಲ್ಲೋ ಚಳಿಗೆ ನಡುಗುತ್ತಿರಬೇಕೆಂದುಕೊಂಡೆ, ಅದೇನನ್ನೋ ಹೇಳಲು ಪ್ರಯತ್ನಿಸುತ್ತಿದ್ದಾನೆ ಹೇಳಲಾಗುತ್ತಿಲ್ಲ ಎಂಬಂತೆ ಭಾಸವಾಯಿತು. ಅವನು ಕುಳಿತಿರುವ ರೆಂಬೆ ಹಿಡಿದು ಕೊಂಡಿರುವ ಕೊಂಬೆಗಳು ಗಡಗಡನೇ ನಡುಗುತ್ತಿವೆ. ಅಂಗೈಯಲ್ಲಿ ಸೆಕೆ ಹೆಚ್ಚಾಗಿ ಕೊಂಬೆಯನ್ನು ಬಿಗಿಯಾಗಿ ಹಿಡಿದುಕೊಳ್ಳಲಾಗದೆ ಇನ್ನೇನ್ನು ಜಾರಿಬೀಳುವಂತಹ ಸ್ಥಿತಿಯಲ್ಲಿದ್ದಾನೆ ಗುಟ್ಟಿ!. ಒಮ್ಮೆ ಧೈರ್ಯಮಾಡಿ “ಅಸ್ವಥಪ್ಪ. . .” ಎಂದ “ಆ” ಎಂದೆ. ನಡುಕದ ಧ್ವನಿಯಲ್ಲಿ *“ ನನ್ನ ತಲೆಯ ಮೇಲೆ. . .! ಕೊಂಬೆಲ್ಲಿ ಯಾರೋ ಕುಂತವ್ರೆ”* ಎಂದ. ನನಗೆ ಒಮ್ಮೆಲೆ ಆಚ್ಚರಿ. . .!, ಗಾಬರಿ. . .!, ಭಯ. . .! ಎಲ್ಲವೂ ಒಟ್ಟೊಟ್ಟಿಗೆ ಬಂದವು. “ಏನೂ ನೀನು ಹೇಳೋದು! ಎಲೆಗಳ್ದು ಗುಂಚ್ಚ ಇರಬೇಕು ಸುಮ್ಮನಿರು” ಎಂದೆ. “ಇಲ್ಲ ಮಾರಾಯ . . .ನೀನು ನನ್ನ ಕೆಳಗೆ ಹೆಂಗ್ ಕುಳ್ತಿದಿಯೋ ಹಾಗೇ ಕುಳ್ತಾವನೆ!, ನಂಗೆ ಜಾಸ್ತಿ ನಡುಕ ಆಗದೆ ಇಲ್ಲಿಂದನೇ ಹಾರ್ಬಿಡ್ತಿನಿ ಈಗ” ಎಂದ. “ ಏ . . .ಏ. . .ಸುಮ್ನೆ ಇರೋ ಮಾರಾಯ ಹಂಗೆನಾರು ಹಾರ್ಗಿರ್ಬಿಟ್ಟೆಯಾ” ಎಂದೆ. “ಇಲ್ಲ ಮಾರಾಯ ಇದು ದೆವ್ವನೆ ಇರ್ಬೇಕು!” ಎಂದ. ನಾನು ಒಮ್ಮೆ ವಿಷಯವನ್ನು ಕೆಳಗಿದ್ದ ನಾರಾಯಣನಿಗೆ ಹೇಳಿದೆ. “ಏ. . .ಸುಮ್ನೆ ಕೂರೋ ಮಾರಾಯ ತಮಾಸೆ ಮಾಡಬ್ಯಾಡ್ರಿ!” ಎಂದು ಸುಮ್ಮನಾದ. “ಹೋ. . .ಮುಗಿತು, ನಮ್ಕತೆ!” ಎಂದು ಪೇಚಾಡುತ್ತಾ ಕೊಂಬೆಯನ್ನು ಬಿಗಿಯಾಗಿ ಹಿಡಿದು ಒಂದು ಕೊಂಬೆ ಕೆಳಗೆ ಇಳಿದು ಬಂದ. ನಂಗೂ ಯಾಕೋ ಮನಸ್ಸಾಗಲ್ಲಿಲ್ಲ. ನಾನು ಒಂದುಕೊಂಬೆ ಕೆಳಗಿಳಿದೆ, ನಾನು ಒಂದುಕೊಂಬೆ ಕೆಳಗಿಳಿದಿದ್ದನ್ನು ನೋಡಿದ್ದೆ ತಡ, ಗುಟ್ಟಿಯು ದಡಬಡನೆ ಒಂದೇ ಸಮನೇ ಇಳಿಯಲಾರಂಭಿಸಿದ!, ನಾನೂ ಭಯದಿಂದ ಇಳಿಯಲಾರಂಬಿಸಿದೆ. ಮರವನ್ನು ಪೂರ್ತಿ ಇಳಿಯಲು ಇನ್ನೂ ಹತ್ತು-ಹದಿನೈದು ಅಡಿ ಬಾಕಿ ಇರುವಾಗಲೇ ಗುಟ್ಟಿಯು ಮೇಲಿನಿಂದಲೇ ಹಾರಿಯೇ ಬಿಟ್ಟ!. ಮರದ ಕೆಳಗಿದ್ದ ತರಗೆಲೆಗಳ ರಾಶಿಯಲ್ಲಿ 'ದುಬಕ್' ಎಂದು ಬಿದ್ದ. ಒಬ್ಬೊಬ್ಬರೆ ದುಬಕ್. . .ದುಬಕ್. . .ಎಂದು ಹಾರಿಬಿದ್ದೆವು. ಓಡಲು ಪ್ರಾರಂಭಿಸಿದೆವು. ಇರಲಿ ಏನೂ ಇರಬೇಕು ಎಂದು ಮೊಂಡು ಧೈರ್ಯಮಾಡಿ ತಲೆಯನ್ನು ಮೇಲೆತ್ತಿ ಮರವನ್ನು ಒಮ್ಮೆ ನೋಡಿದೆವು. ಗುಟ್ಟಿಯು ಕುಳಿತ್ತಿದ್ದ ಎತ್ತರದಲ್ಲಿ



ಒಂದು ಕೊಂಬೆಯ ಮೇಲೆ ಏನೋ? ಯಾರೋ? ಆಳೆತ್ತರಕ್ಕೆ ಕುಳಿತ್ತಿರುವುದು ಸೂರ್ಯನು ಈಗ ತಾನೆ ಮೂಡುತ್ತಿರುವುದರಿಂದ ಅಸ್ಪಷ್ಟವಾಗಿ ಕಾಣಿಸಿತು.

ಗುಟ್ಟೆಯು “ನಂಗೆ ಗೊತ್ತು, ಅದು ದೆವ್ವನೆ ಇರ್ಬೇಕು!” ಎಂದ. ನಾರಾಯಣನು “ಏ. . .ಇಲ್ಲ ಇರೋ ಮಾರಾಯ ಕರಡಿನೋ ಏನೂ! ಇರ್ಬೇಕು” ಎಂದ. ಪಟಪಟ ಸದ್ದಾಯಿತು, ತಲೆ ಎತ್ತಿ ನೋಡಿದೆವು ಯಾವುದೋ ದೊಡ್ಡದೊಂದು ಪಕ್ಷಿ *“ಕಿಕ್ಕೆ. . .ಕಿಕ್ಕೆ. . .ಕಿಕ್ಕೆ. . .ಕಿಕ್ಕೆ. . .ಕಿಕ್ಕೆ. . .”* ಎಂದು ಕೂಗುತ್ತಾ ಹಾರಿತು. ಆ ಕಪ್ಪನೇಯ ನೀಲಾಕಾಶದಲ್ಲಿ ಹಾರಿದ್ದು ಸ್ಪಷ್ಟವಾಗಿ ಕಾಣಿಸಿತು. ಹಾರಿ ಪಕ್ಕದಲ್ಲೆ ಬೋಳಾಗಿನಿಂತಿದ ಮರದ ತುದಿಯಲ್ಲಿ ಕುಳಿತುಕೊಂಡಿತು. ಮೂವ್ವರು ಒಮ್ಮೆಲೆ ನಿಟ್ಟುಸಿರುಬಿಟ್ಟೆವು, ಮತ್ತೆ ಮರವನೇರಿ ಕುಳಿತ್ತೆವು.

ದೂರದ ಮೂಡಲ ಬೆಟ್ಟಗುಡ್ಡಗಳಲ್ಲಿ ಬೆಳಗು ಆಗುತ್ತಿತ್ತು, ನೆತ್ತಿಯ ಮೇಲೆ ಇಬ್ಬನಿಯ ಹನಿಗಳು ತೊಟ್ಟಿಕ್ಕುತ್ತಿತ್ತು, ಆಳಗಳಲ್ಲಿ ಮಂಜಿನ ಮೊಡಗಳು ತೊರೆಗಳಂತೆ ಹರಿದು ಹೋಗುತ್ತಿದ್ದವು, ದೂರದಲ್ಲೆಲ್ಲೋ ಕಾಡುಕೋಳಿಗಳು “ತೆಕೊ. . .ತೆಕ್. . .ತೆಕ್. . .ತೆಕೊ. . .ತೆಕ್. . .ತೆಕ್. . .” ಎಂದು ಕೂಗುತಿದ್ದವು. ರಾತ್ರಿ ಗುಟ್ಟೆಯ ತಲೆಯ ಕೊಂಬೆಯ ಮೇಲೆ ಕುಳಿತಿದ ವ್ಯಕ್ತಿಯನ್ನು ಎದುರಿಗಿದ್ದ ಬೋಳುಮರದ ತುದಿಯಲ್ಲಿ ನೋಡಿದೆವು, ಅವನು ಯಾರು ಅಲ್ಲ, ಹಾವು ಗಿಡುಗನಾಗಿದ್ದ. ಇವನನ್ನು ಇಂಗ್ಲೀಷ್ನಲ್ಲಿ *“ಕ್ರೆಸ್ಟೆಡ್ ಸರ್ಪೆಂಟ್-ಈಗಲ್”* (Crested Serpent-Eagle) ಎಂದು ಕರೆಯುವರು. ಹದ್ದಿಗಿಂತ ದೊಡ್ಡದಾದ ಪಕ್ಷಿ, ಕಡುಕಂದು ಬಣ್ಣ, ಕಪ್ಪು ತಲೆ, ಕಣ್ಣಿನ ಸುತ್ತ ಹಳದಿಯಾಗಿದ್ದು, ಮುಂಭಾಗದಲ್ಲಿ ಕಪ್ಪು-ಬಿಳಿಯ ಚುಕ್ಕಿಗಳನ್ನು ಹೊಂದಿದ ತಳಭಾಗ ತಿಳಿಕಂದು ಬಣ್ಣವಿದ್ದು. ಬಾಲದ ತುದಿಯ ಕೆಳಭಾಗದಲ್ಲಿ ಬಿಳಿ-ಕಪ್ಪು ಪಟ್ಟಿಗಳು ಹಾರುವಾಗ ಸ್ಪಷ್ಟವಾಗಿ ಕಾಣುತ್ತದೆ. ಬಂಡೀಪುರ, ನಾಗರಹೊಳೆ, ಕುದುರೆಮುಖ, ಭದ್ರ, ಬಿಳಿಗಿರಿ ಕೂಡ ಕಂಡು ಬರುತ್ತದೆ.




- ಅಶ್ವಥ ಕೆ.ಎನ್






# ವಿದ್ಯಾರ್ಥಿಗಾಗಿ ವಿಜ್ಞಾನ

### ❖ *ನೀಲಗಿರಿ ಎಲೆಯಲ್ಲಿ ಚಿನ್ನ !*

ನೀಲಗಿರಿ ಮರದ ತೋಪುಗಳನ್ನು ನೀವು ಸರ್ವೇ ಸಾಮಾನ್ಯ ನೋಡಿರುತ್ತೀರಿ ಮೊನ್ನೆ ಮೊನ್ನೆ ಈ ಜಾತಿಯ ಮರಗಳು ಹೆಚ್ಚು ನೀರು ಬಳಸಿ ಬಸಿಯುತ್ತವೆ ಎಂದೂ, ಇದರಿಂದ ಅಂತರ್ಜಲ ಮಟ್ಟ ಕುಸಿಯುತ್ತಿದೆ ಎಂದೂ ಕರ್ನಾಟಕ ಸರ್ಕಾರ ನೀಲಗಿರಿ ಸಸಿಗಳನ್ನು ನೇಡುವುದನ್ನು ನಿಷೇಧಿಸಿದೆ. ಆದರೂ ಕಾಡನ್ನು ಹಸಿರಾಗಿಸಲು ಎರಡು ದಶಕಗಳ ಹಿಂದೆ ನೆಟ್ಟ ನೀಲಗಿರಿಯ ಬೃಹತ್ ಮರಗಳನ್ನು ನಾವು ಕಾಡಿನ ಅಲ್ಲಲ್ಲಿ ಕಾಣಬಹುದು. ನೀವು ಕೂಡ ನೀಲಗಿರಿ ಸೊಪ್ಪನ್ನೋ ಅದರ ತರಗನ್ನೋ ನೀರೊಲೆಗೆ ತುರುಕಿ ಬೆಂಕಿಕೊಟ್ಟು ಬಿಸಿ ಬಿಸಿ ನೀರು ಕಾಯಿಸಿ ಚುಮು ಚುಮು ಚಳಿಯಲ್ಲಿ ಬೆಚ್ಚಗೆ ಸ್ನಾನ ಮಾಡಿರಬಹುದು.






ಇತ್ತೀಚೆಗೆ ಆಸ್ಟ್ರೇಲಿಯಾದ ಮೆಲ್ವಿನ್ ಲಿನ್ಟ್ರನ್ ಮತ್ತು ವಿಜ್ಞಾನಿಗಳ ತಂಡ ಹಳೆಯ ನೀಲಗಿರಿ ಮರದ ಎಲೆಗಳಲ್ಲಿ ಚಿನ್ನದ ಸೂಕ್ಷ್ಮ ತುಣುಕುಗಳು ಇವೆ ಎಂದು ಕಂಡು ಹಿಡಿದಿದ್ದಾರೆ. ಈ ಎಲೆಗಳನ್ನು ತಿಂದ ಗೆದ್ದಲು ಹುಳುಗಳ ಹೊಟ್ಟೆಯಲ್ಲೂ ಚಿನ್ನ ಶೇಕರವಾಗಿದೆಯಂತೆ! ಈ ಗಿಡದ ಎಲೆಗಳಿಗೆ ಚಿನ್ನ ಎಲ್ಲಿಂದ ಬಂತು? ಎಂದು ಹುಡುಕುತ್ತ ಹೋದಾಗ ಅಲ್ಲೇ 30 ಮೀಟರ್ ಆಳದಲ್ಲಿ ಚಿನ್ನದ ನಿಕ್ಷೇಪವಿದೆ ಎಂದು ಕಂಡು ಹಿಡಿದಿದ್ದಾರೆ. ಮೂವತ್ತು ಮೀಟರ್ ಆಳದವರಿಗೂ ಬೆಳೆಯುವ ನೀಲಗಿರಿ ಮರದ ಬೇರುಗಳು ನೀರನ್ನು ಹೀರುವಾಗ ಸ್ವಲ್ಪ ಪ್ರಮಾಣದ ಚಿನ್ನ ಬೇರಿನ ಮೂಲಕ ಮರಕ್ಕೆ ಸಾಗಣೆಯಾಗುತ್ತದೆ. ಮರಕ್ಕೆ ಚಿನ್ನವು ವಿಷಕಾರಿಯಾಗಿರುವುದರಿಂದ ಅದು ಎಲೆಗಳಲ್ಲಿ ಶೇಕರಿಸುತ್ತದೆ. ಮುಂದೊಂದು ದಿನ ಎಲೆ ಉದುರಿದಾಗ ಅದು ಭೂಮಿಯ ಮೇಲ್ಮೈ ಮೇಲೆ ಶೇಕರವಾಗುತ್ತದೆ ಎಂದು ಸವಿವರವಾದ ಸಂಶೋಧನೆ ನಡೆಸಿ ಕಂಡುಹಿಡಿದಿದ್ದಾರೆ.

ನಿಮಗೆನಾದರೂ ನೀಲಗಿರಿ ಎಲೆಗಳು ಸಿಕ್ಕಿದರೆ ಜೋಪಾನವಾಗಿ ಜೋಬಿಗೆ ಇಟ್ಟುಕೊಳ್ಳಬೇಡಿ!. ಆ ಎಲೆಗಳಲ್ಲಿ ಇರುವ ಚಿನ್ನದ ಪರಿಮಾಣ ಆ ಎಲೆಯ ತೂಕದ 0.00005% ಮಾತ್ರ.

- ಶಂಕರಪ್ಪ ಕೆ.ಪಿ





# ಚಿಟ್ಟೆ ಗುರುತು

## * ಹುಚ್ಚು ಚಿಟ್ಟೆ

**ಇಂಗ್ಲೀಷ್ ಹೆಸರು : Psyche** **ವೈಜ್ಞಾನಿಕ ಹೆಸರು: *Leptosia nina***

ಕೆಲ ತಿಂಗಳ ಹಿಂದೆ ನಮ್ಮ ಅಶ್ವಥಣ್ಣ ಚಿಟ್ಟೆಗಳ ಬಗ್ಗೆ ಒಂದು ಪ್ರೊಜೆಕ್ಟ್ ಶುರು ಮಾಡಿದ್ರು ಅದರಲ್ಲಿ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದಲ್ಲಿನ ಚಿಟ್ಟೆಗಳನ್ನ ಫೋಟೋಗ್ರಾಫ್ ಮಾಡಿ ಆವಾಸವನ್ನ ಅಧ್ಯಯನ ಮಾಡಿ GPS Point ಸಹಾ ಮಾಡುತ್ತಿದ್ದರು. ನಾನು ಒಮ್ಮೆ ಇವರ ಸಹಾಯಕನಾಗಿ ಹೋಗಿದ್ದೆ, ನಮ್ಮ ಹಳ್ಳಿಯ "ಉಪ್ಪರೆ" ಬಂಡೆಯ ಕೆಳಗಿನ ಉಪ್ಪನೀರಿನ ಹಳ್ಳದ ಕಡೇ ಹೆಗಲಿಗೆ ಕ್ಯಾಮರಾ ಏರಿಸಿ ಕೈಯಲ್ಲಿ ಪುಸ್ತಕ ಹಿಡಿದು ಹೊರಟೆವು.

ದಾರಿಯುದ್ದಕ್ಕೂ ಚಿಟ್ಟೆಗಳ ಹಾರಾಟ ಅವುಗಳ ಆವಾಸ, ಎಲ್ಲೆಲ್ಲಿ ಹೆಚ್ಚಾಗಿ ಸಿಗುತ್ತವೆ, ಹೀಗೆ ಮಾತನಾಡುತ್ತಾ ಹೆಜ್ಜೆ ಹಾಕಿದೆವು. ಕಾಡ ಅಂಚಿನಲ್ಲಿಯೆ ಹರೆಯುವ ಹಳ್ಳದ ಪಕ್ಕದಲ್ಲೆ ನಡೆದು ಸಾಗುತ್ತಿದ್ದೆವು, ನನ್ನ ಕಣ್ಣಿಗೆ ಒಂದು ಬಿಳಿ ಬಣ್ಣದ ಚಿಟ್ಟೆಯೊಂದು ಕಾಣಿಸಿತು, ವಿಚಿತ್ರ ಎಂದರೆ ಅದು ಕೂರುವ ಶೈಲಿಯೇ ಬೇರೆ, ನಾನು "ಅಶ್ವಥಣ್ಣ ಇಲ್ನೋಡು ಈ ಚಿಟ್ಟೆ ಹೆಂಗ್ ಕೂತ್ಕೈತೆ" ಎಂದು ತೋರಿಸಿದೆ. “ಓ ಅದಾ ಹುಚ್ಚ್ ನನ್ ಮಗಂದು ಬಾರೊ ಅದನ್ನ ಫೋಟೋ ತೆಗ್ದಿದಿನೀ ಎಂದರು. ನಾನು ನಕ್ಕಿ " ಏ ಸರಿಯಾಗ್ ಹೇಳ್ ಮಾರಾಯ " ಎಂದೆ.

ಇದರ ಹೆಸರು PSYCHE ಅಂತ ಅಂದರೆ ಹುಚ್ಚಾ ಅಂತ ಅರ್ಥ, ಇವು ಕೂರುವ ಶೈಲಿಯನ್ನ ನೋಡೆ ಇವುಗಳಿಗೆ ಆ ಹೆಸರು ಬಂದಿರಬಹುದು. ಸಾಮಾನ್ಯವಾಗಿ ಭಾರತ, ಶ್ರೀಲಂಕಾ, ಬಾಂಗ್ಲಾದೇಶ, ಮಯನ್ಮಾರ್ ಗಳಲ್ಲಿ ಕಾಣಸಿಗುವ ಈ ಚಿಟ್ಟೆಗಳು ಕುರುಚಲು ಕಾಡುಗಳಲ್ಲಿ ಹೆಚ್ಚಾಗಿ ಕಾಣಿಸಿ ಕೊಳ್ಳುತ್ತವೆ. 30-50 ಮಿ ಮಿ ಉದ್ದ ರೆಕ್ಕೆಗಳನ್ನ ಹೊಂದಿದ್ದರು ಇವು ಸತತವಾಗಿ ಹಾರುವ ಸಾಮರ್ಥ್ಯವನ್ನು ಹೊಂದಿವೆ.



ಹೆಚ್ಚಾಗಿ ತಳಮಟ್ಟದಲ್ಲಿ ಹಾರಾಡುತ್ತವೆ. ಕೂರುವಾಗ ತನ್ನ ನಾಲ್ಕೂ ರೆಕ್ಕೆಗಳನ್ನು ಜೋಡಿಸಿದಂತೆ ಕೂರುವುದಿಂದಲೇ ಇವಕ್ಕೆ PSYCHE ಎಂದು ಹೆಸರು ಬಂದಿರಬೇಕು. ಹೆಣ್ಣೂ ಮತ್ತು ಗಂಡು ಚಿಟ್ಟೆಗಳು ನೋಡಲು ಬಿಳಿಬಣ್ಣದಲ್ಲಿದ್ದು ಯಾವುದೇ ವ್ಯತ್ಯಾಸವಿರುವುದಿಲ್ಲ. ಮುಂದಿನ ರೆಕ್ಕೆಗಳ ಮೇಲ್ಭಾಗವು ಕಪ್ಪು ಗೆರೆಗಳಿಂದ ಕೂಡಿರುತ್ತವೆ. ಹಿಂಭಾಗದ ರೆಕ್ಕೆಗಳಲ್ಲಿ ತಿಳಿಹಸಿರು ಗೆರೆಗಳನ್ನು ನೋಡಬಹುದು.

- ಮಹದೇವ ಕೆ.ಸಿ





# ಭಾವನೆಗಳು ಮನುಷ್ಯರಿಗೆ ಮಾತ್ರ ಸೀಮಿತವೆ?

ಒಂದಷ್ಟು ದಿನ ಕಾರ್ಯನಿಮಿತ್ತ ಒಂದು ಪ್ರದೇಶದಲ್ಲಿ ತಂಗಿದ್ದೆ. ಪ್ರಶಾಂತ ಪರಿಸರ ಅದು. ದಾರಿಯುದ್ದಕ್ಕೂ ಹಸಿರು ಮತ್ತು ಪಕ್ಕದಲ್ಲೆ ಸುಂದರವಾದ ಕೆರೆ ಇದ್ದ ಕಾರಣ, ಅನೇಕ ಪಕ್ಷಿ ಸಂಕುಲ ಅಲ್ಲಿದ್ದ ಮರಗಳಲ್ಲಿ ವಾಸವಾಗಿದ್ದವು. ಬೆಳಗೆದ್ದು ಅವುಗಳ ದಿನಾರಂಭದ ಚಿಲಿಪಿಲಿಯ ಭಾಗವಾಗುವುದೇ ನನಗೊಂದು ಸಂಭ್ರಮದ ಕೆಲಸವಾಗಿತ್ತು. ಸಂಜೆಯೂ ಹಾಗೆ ಹೊರಗೆ ಆಹಾರ ಅರಸಿಬರುವ ತಂದೆ ಮತ್ತು ತಾಯಿ ಹಕ್ಕಿ, ಅವುಗಳ ಆಗಮನಕ್ಕೆ ಕಾಯುವ ಇನ್ನೂ ರೆಕ್ಕೆ ಬಲಿತಿರದ ಪುಟ್ಟ ಹಕ್ಕಿಗಳು, ಅವುಗಳ ಸಮ್ಮಿಲನ, ಇದನ್ನು ನೋಡುವುದೇ ಇನ್ನೊಂದು ರೀತಿಯ ಖುಷಿ. ಇದು ನಿತ್ಯದ ದಿನಚರಿಯಾಗಿತ್ತು.




**ಘಟನೆ ೧:** ಒಂದು ದಿನ ಇದೇ ರೀತಿಯ ಸಂಭ್ರಮದಲ್ಲಿ ಭಾಗಿಯಾಗಿ ಖುಷಿಯಿಂದ ನನ್ನ ಕಾರ್ಯ ನಿಮಿತ್ತ ಹೊರಹೋಗಿದ್ದೆ. ಸಂಜೆ ಮರಳಿ ಬರಬೇಕಾದರೆ ಯಾವತ್ತಿನ ಸದ್ದು ಕೇಳಿಸಲಿಲ್ಲ. ಸ್ವಲ್ಪ ದೂರ ನಡೆದು ಬಂದಾಗ ಮರದ ಕೊಂಬೆಗಳನ್ನೆಲ್ಲಾ ಕಡಿದು ಹಾಕಿದ್ದು ಗೊತ್ತಾಯಿತು. ಶುಭ್ರಾಕಾಶ ಗೋಚರಿಸುತ್ತಿತ್ತು. ಕಾರಣ ದಾರಿಯ ಇಕ್ಕೆಲಗಳಲ್ಲಿ ಮರಗಳು ಸ್ವಚ್ಛಂದವಾಗಿ ಬೆಳೆದರೆ ಘನ ವಾಹನಗಳ ಸಂಚಾರಕ್ಕೆ ಅಡಚಣೆಯಾಗುತ್ತದೆ, ಅಲ್ಲದೆ ದಾರಿ ಹೋಕರಿಗೆ ತೊಂದರೆಯಾಗುತ್ತದೆ.

ಇನ್ನೇನು ಕೊಠಡಿ ತಲುಪುವ ವೇಳೆ ಕೊನೆಯ ಮರದ ಶಿರಚ್ಛೇದನ ಕಾರ್ಯ ನಡೆಯುತ್ತಿತ್ತು. ಮರದ ಮೇಲೆ ವಾಸವಾಗಿದ್ದ ಪುಟಾಣಿ ಮರಿಗಳು ಕೆಳಗೆ ಬಿದ್ದು ಆವಾಗಲೆ ಇಹ ಲೋಕಕ್ಕೆ ನಮಸ್ಕಾರ ಹೇಳಿಯಾಗಿತ್ತು. ಇಷ್ಟೆಲ್ಲ ಕೊಂಬೆ ಕಡಿಯುವ ಭರದಲ್ಲಿ ನಡೆದು ಹೋಗಿತ್ತು. ಅವನ ಮುಖದಲ್ಲಿ ಯಾವುದೇ ವಿಷಾದದ ಗೆರೆ ಕಾಣಿಸಲೇ ಇಲ್ಲ. ಸತ್ತ ಮರಿಗಳನ್ನು ದೂರ ಎಸೆದು ಮನೆಗೆ ನಡೆದೇ ಬಿಟ್ಟ.




**ಘಟನೆ ೧:** ಸೂರ್ಯ ಇನ್ನೇನು ಮುಳುಗಿಯೇ ಬಿಟ್ಟ ಎನ್ನುವಷ್ಟರಲ್ಲಿ ಕೊಕ್ಕರೆಗಳೆರಡು (ತಂದೆ ಹಕ್ಕಿ ಮತ್ತು ತಾಯಿ ಹಕ್ಕಿ) ಮರದ ಬಳಿಗೆ ಬಂದವು, ಗೂಡು ನಾಶವಾಗಿತ್ತು, ಮರಿಗಳು ಮರೆಗೆ ಸರಿದಿದ್ದವು. ಆ ಕಡೆ, ಈ ಕಡೆ ದಿಕ್ಕು ತೋಚದವರಂತೆ ಓಡಾಡಿ, ಸ್ವಲ್ಪ ಚೀರಾಡಿ ಪಾಪ ಸುಮ್ಮನಾಗಿ ಬಿಟ್ಟವು. ಮೂಕ ವೇದನೆ ಯಾವತ್ತೂ ಹಾಗೆ ಅಲ್ಲವೆ?

**ಘಟನೆ ೨:** ಆ ಮರ ಕಡಿದ ಮನುಷ್ಯ ಆತನ ಮನೆಯನ್ನು ತಲುಪುತ್ತಾನೆ. ಜಗುಲಿಯ ಮೇಲಿದ್ದ ಮಗು ಅಪ್ಪನನ್ನು ಕಂಡ ಖುಷಿಗೆ ಓಡಿ ಬರುವಾಗ ಎಡವಿ ಬಿದ್ದು ಸ್ವಲ್ಪ ತರಚುಗಾಯಗಳಾಗಿ ಅಳತೊಡಗುತ್ತದೆ. ಅಪ್ಪನ ಹೃದಯ ಕರಗಿ, ಎರಡು ಕೈಗಳಲ್ಲಿ ಬಾಚಿ ತಬ್ಬಿ ಮಗುವಿನ ಹಣೆಗೆ ಮುತ್ತಿಕ್ಕುತ್ತಾನೆ. ಮಗು ಶಾಂತವಾಗುತ್ತದೆ.

ಹಾಗಾದರೆ ಆ ಕೊಕ್ಕರೆಯ ಪರಿವಾರಕ್ಕೆ ಸಾಂತ್ವನ ಹೇಳುವವರು ಯಾರು? ಸಂಬಂಧಗಳು ಕೇವಲ ಮನುಷ್ಯನಿಗೆ ಮಾತ್ರವೇ? ಉಳಿದ ಜೀವಿಗಳಿಗೆ ಅದರದ್ದೇ ಆದ ಭಾವನೆಗಳು ಇರುವುದಿಲ್ಲವೇ? ಭಾವನೆಗಳು ಕೇವಲ ನಮ್ಮ ಸ್ವತ್ತೇ? ಘಟನೆ ಮೂರರಲ್ಲಿ ಮಗುವಿಗಾದ್ದು ತರಚುಗಾಯ ಆದರು ಮಾತ್ರ ಹೃದಯ ಕರಗಿ ಹೋಯಿತು. ಹಾಗಾದರೆ ಕೊಕ್ಕರೆಗಳ ಹೃದಯ ಅದೆಷ್ಟು ಪರಿತಪಿಸಿರಬಹುದು?



- ಕಾರ್ತಿಕ್ ಕೋಟೆ,
ಮಂಗಳೂರು




ಬೇಸಿಗೆ ಸಮೀಪಿಸುತ್ತಿದ್ದಂತೆ ಕಾಡಿನಲ್ಲಿರುವ ಮರಗಳು ತಮ್ಮ ಎಲೆಗಳನ್ನು ಉದುರಿಸಿಕೊಂಡು ಬೋಳಾಗಿ ನೆಲದ ಮೇಲೆ ಒಣ ಎಲೆಯ ಹಾಸಿಗೆಯನ್ನು ಸೃಷ್ಟಿಸಿರುತ್ತವೆ. ಒಣಎಲೆಯ ರಾಶಿಗೆ, ಮಳೆಯಿಲ್ಲದೆ ಒಣಗಿರುವ ಹುಲ್ಲುಗಳಿಗೆ ಒಂದು ಕಿಡಿ ಬೆಂಕಿ ಸೋಕಿದರೆ ಸಾಕು ಅಗ್ನಿಯು ಇಡೀ ಕಾಡನ್ನೇ ಬಾಚಿ ತಬ್ಬುತ್ತದೆ. ಇದನ್ನೇ ನಾವು ಕಾಳ್ಗಿಚ್ಚು ಎನ್ನುವುದು. ಫೆಬ್ರುವರಿ ಮತ್ತು ಮಾರ್ಚ್ ತಿಂಗಳುಗಳಲ್ಲಿ ಕಾಳ್ಗಿಚ್ಚು ಮಾಧ್ಯಮಗಳಲ್ಲಿ ಹರಿದಾಡುವ ಸಾಮಾನ್ಯ ವಿಷಯವಾಗಿದೆ. ಕಾಳ್ಗಿಚ್ಚು ವರ್ಷಕ್ಕೆ ಶೇಕಡಾ 50 ಭಾಗದ ಕಾಡನ್ನು ಬಲಿ ತೆಗೆದುಕೊಳ್ಳುತ್ತಿದೆ ಎಂದು 'ಫಾರೆಸ್ಟ್ ಸರ್ವೇ ಆಫ್ ಇಂಡಿಯಾ' ಅಂದಾಜಿಸಿದೆ.

ಕಾಳ್ಗಿಚ್ಚಿನ ಉತ್ಪತ್ತಿ ಎರಡು ಕಾರಣಗಳಿಂದ ಆಗುತ್ತದೆ ಅವುಗಳೆಂದರೆ ನೈಸರ್ಗಿಕ ಮತ್ತು ಮಾನವ ನಿರ್ಮಿತ. ನೈಸರ್ಗಿಕ ಅಂದರೆ ಮಿಂಚುಗಳಿಂದ ಅಥವಾ ಬಿದಿರುಗಳ ಉಜ್ಜಾಟದಿಂದ ಉಂಟಾಗುತ್ತದೆ. ಮಿಂಚಿನ ಜೊತೆ ಮಳೆಯು ಬರುವುದರಿಂದ ಮಿಂಚಿನಿಂದ ಉಂಟಾದ ಕಾಳ್ಗಿಚ್ಚಿಗೆ ಆಯಸ್ಸು ಅತ್ಯಲ್ಪ. ಇನ್ನೂ ಬಿದಿರುಗಳ ಉಜ್ಜಾಟದಿಂದ ಪ್ರಪಂಚದಲ್ಲಿರುವ ಕಾಡುಗಳಿಗೆ ಬೆಂಕಿ ಬೀಳುವುದು ಕೇವಲ 2 % ಮಾತ್ರ. ಅದರಲ್ಲೂ ನಮ್ಮ ಕರ್ನಾಟಕದ ಕಾಡಿನಲ್ಲಿ ಬಿದಿರುಗಳ ಉಜ್ಜಾಟಗಳಿಂದ ಬೆಂಕಿ ಬೀಳುವುದು ಅತಿ ವಿರಳ. ಕಾಳ್ಗಿಚ್ಚಿನ ಮುಖ್ಯ ಕಾರಣ ಮಾನವರು. ಕಾಡಿಗೆ ಬೆಂಕಿ ಹಾಕಿದರೆ ಮಳೆಯಾದ ಕೆಲವೇ ದಿನಗಳಲ್ಲಿ ಹುಲ್ಲು ಬೆಳೆಯುವುದು ಎಂದು ತಿಳಿದಿರುವ ಹಳ್ಳಿಯ ಜನರು ತಮ್ಮ ಜಾನುವಾರುಗಳಿಗೆ ಹುಲ್ಲು ಬೇಗ ಬರಲೆಂದು ಕಾಡಿಗೆ ಉದ್ದೇಶಪೂರ್ವಕವಾಗಿಯೇ ಬೆಂಕಿ ಹಚ್ಚುತ್ತಾರೆ. ಹಾಗೆಯೇ ಜೇನು ಸಂಗ್ರಹಣೆ ಮಾಡಲು, ಹುಲ್ಲುಗಳಲ್ಲಿ ಉದುಕಿಕೊಂಡಿರುವ ಕಾಡು ಪ್ರಾಣಿಗಳ ಅವಶೇಷಗಳನ್ನು ಸುಲಭವಾಗಿ ಹುಡುಕಿ ತೆಗೆದುಕೊಂಡು ಮಾರಲು ಸಹ ಬೆಂಕಿ ಹಚ್ಚುತ್ತಾರೆ. ಬೇಟೆಗಾರರು ಅರಣ್ಯಾಧಿಕಾರಿಗಳ ದ್ವೇಷದಿಂದ ಕಾಡಿಗೆ ಬೆಂಕಿ ಹಚ್ಚಿ ದ್ವೇಷ ತೀರಿಸಿಕೊಳ್ಳುತ್ತಾರೆ. ಒಮ್ಮೊಮ್ಮೆ ಅರಣ್ಯ ಸಿಬ್ಬಂದಿಗಳೇ ಅವರ ಮೇಲಧಿಕಾರಿಗಳ ಮೇಲಿನ ದ್ವೇಷಕ್ಕೆ ಕಾಳ್ಗಿಚ್ಚನ್ನು ಸೃಷ್ಟಿಸಿದ್ದಾರೆ. ದಾರಿಹೋಕರು ಸೇದಿ ಬಿಸಾಡುವ ಬೀಡಿ, ಸಿಗರೇಟ್ಗಳು ಕಾಳ್ಗಿಚ್ಚಿಗೆ ಕಾರಣವಾಗಿವೆ.

ಕಾಳ್ಗಿಚ್ಚಿಗೆ ಪ್ರತಿ ವರ್ಷ ಸಾವಿರಾರು ಪ್ರಾಣಿಗಳು, ಪಕ್ಷಿಗಳು, ಸರಿಸೃಪಗಳು, ಕೀಟಗಳು, ಮರಗಳು ಜೀವಂತ ಭಸ್ಮವಾಗುತ್ತಿವೆ. ನೆಲದ ಮೇಲೆ ಮೊಟ್ಟೆ ಇಟ್ಟು ಮಾರಿಮಾಡಿಸುವ ಹಕ್ಕಿಗಳಾದ ನೆತ್ತಿಂಗ, ಉತ್ತುತ್ತಿ ಹಾಗೂ ಮುಂತಾದ ಪಕ್ಷಿಗಳ ಮೊಟ್ಟೆ ಅಥವಾ ಸಣ್ಣ ಮರಿಗಳು ತಪ್ಪಿಸಿಕೊಳ್ಳಲಾಗದೆ ಬೆಂಕಿಗೆ ಬಲಿಯಾಗಿ ಅವುಗಳ ಸಂತತಿ ಕುಗ್ಗುತ್ತಿದೆ.







ಕಾಳ್ಗಿಚ್ಚಿನಿಂದ ಕಾಡು ಜೀವಿಗಳಿಗೆ ಮಾತ್ರ ತೊಂದರೆಯಾಗುತ್ತಿಲ್ಲ, ಕಾಳ್ಗಿಚ್ಚಿನಿಂದ ಬರುವ ಅಪಾರವಾದ ಹೊಗೆಯಲ್ಲಿ ಇಂಗಾಲ ಡೈ ಆಕ್ಸೈಡ್ ಮತ್ತು 'ಗ್ರೀನ್ ಹೌಸ್' ಅನಿಲಗಳಿರುವುದರಿಂದ ಜಾಗತಿಕ ತಾಪಮಾನ ಹೆಚ್ಚುತ್ತಿದೆ ಮತ್ತು ಓಜೋನ್ ಪದರ ಕ್ಷೀಣಿಸುತ್ತಿದೆ. ಹಾಗೆಯೇ ಮನುಷ್ಯರು ಹಲವಾರು ರೀತಿಯ ಉಸಿರಾಟದ ಕಾಯಿಲೆಗೆ ತುತ್ತಾಗುತ್ತಿದ್ದಾರೆ.

ಕಾಳ್ಗಿಚ್ಚು ಉಂಟಾಗದಂತೆ ಮಾಡಲು ಅರಣ್ಯ ಇಲಾಖೆಯವರು ತುಂಬಾ ಯೋಜನೆಗಳನ್ನು ಹಮ್ಮಿಕೊಂಡಿವೆ. ಕಾಡಿನ ಅಂಚಿನಲ್ಲಿರುವ ಕಾಲುದಾರಿಗಳ ಪಕ್ಕದಲ್ಲಿ ಅರಣ್ಯ ಇಲಾಖೆಯವರೇ ಬೇಸಿಗೆ ಸಮೀಪಿಸುತ್ತಿದ್ದಂತೆ ಬೆಂಕಿ ಹಚ್ಚಿ ನಂದಿಸುವುದು, ಕಾಡಿನ ಮಧ್ಯದಲ್ಲಿ 'ಫೈರ್ ಲೈನ್' ಮಾಡಿ ಕಾಡನ್ನು ಭಾಗಗಳನ್ನಾಗಿ ವಿಂಗಡಿಸಿ ಬೆಂಕಿ ಬಿದ್ದರೂ ಹೆಚ್ಚು ಕಾಡು ಹಾನಿಯಾಗದಂತೆ ನೋಡಿಕೊಳ್ಳುವುದು. ಕಾಡಿನ ಸುತ್ತಮುತ್ತಲಿನ ಜನರಿಗೆ ಕಾಳ್ಗಿಚ್ಚಿನ ದುಷ್ಪರಿಣಾಮಗಳ ಬಗ್ಗೆ ತಿಳಿ ಹೇಳುವುದು ಮಾಡುತ್ತಿದೆ.

ಅರಣ್ಯ ಇಲಾಖೆಯ ಜೊತೆ ಹಲವಾರು ಸಂಘ ಸಂಸ್ಥೆಗಳು ಕಾಳ್ಗಿಚ್ಚಿನಿಂದ ಕಾಡನ್ನು ರಕ್ಷಿಸಲು ಹರಸಾಹಸ ಪಡುತ್ತಿದ್ದರೂ ಕಾಳ್ಗಿಚ್ಚೇನು ಕಡಿಮೆಯಾಗಿಲ್ಲ ಹೀಗೆ ಮುಂದುವರಿದರೆ ನಮ್ಮಲ್ಲಿ ಇರುವ ಅಲ್ಪ ಕಾಡು ಮಾಯವಾಗುವುದು ಗ್ಯಾರಂಟಿ.
ಅದಕ್ಕೋಸ್ಕರ ಎಲ್ಲಾ ನಾಗರೀಕರು ಕಾಡಿಗೆ ತಮ್ಮಿಂದ ಬೆಂಕಿ ಬೀಳದಂತೆ ಹಾಗೂ ಬೆಂಕಿ ಕಂಡರೆ ತಕ್ಷಣ ಹಾರಿಸಲು ಅಥವಾ ಅರಣ್ಯ ಅಧಿಕಾರಿಗಳಿಗೆ ಸಹಕರಿಸಿ ಕಾಡನ್ನು ಕಾಳ್ಗಿಚ್ಚಿನಿಂದ ರಕ್ಷಿಸೋಣ.

- ನಾಗೇಶ್ ಓ. ಎಸ್



# ಮುಂಜಾನೆ

ಮಳೆ ಹನಿಯ

ಸದ್ದಿನಲಿ

ಮುಂಜಾನೆಯ ಮುಸುಕಿನಲಿ

ಅರಳಿದೆ ತಾವರೆ

ಕೆಂಪಾಗಿ

ಮಂದಸ್ಮಿತ ಮುಖವಿದೆ

ತಂಪಾಗಿ

ಕೂಗಿರಲು ಕೋಗಿಲೆ

ಕುಣಿಯಿತಿರಲು ನವಿಲು

ಕಳೆದಿದೆ ದುಃಖ ಮಾಯವಾಗಿ

ಬಂದಿದೆ ನಿದ್ದೆ ಹಾಯಾಗಿ

ಇಣುಕಿರುವ ಸೂರ್ಯ

ಮರೆಯಾದ ಚಂದ್ರ

ಕಾಣುತಿದೆ ಆಗಸ ರಂಗಾಗಿ

ತೇಲುತಿದೆ ಮನ ಹಾಯಾಗಿ

- ಶ್ರೀಕಾಂತ್ ಬಿ .ಭಟ್